## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1627 |
| ಸದಸ್ಯರ ಹೆಸರು | ಶ್ರೀ. ಹೆಚ್.ಎಂ. ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವವರು | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 20-03-2020 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಮಹಿಳೆಯರ ಆರೋಗ್ಯ, ಮಕ್ಕಳಿಗೆ ಪೌಷ್ಠಿಕ ಆಹಾರ ಭದ್ರತೆಯ ವಿಚಾರದಲ್ಲಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ; (ವಿವರ ನೀಡುವುದು) | **ರಾಜ್ಯದಲ್ಲಿ ಮಹಿಳೆಯರ ಆರೋಗ್ಯ ಮತ್ತು ಆಹಾರ ಭದ್ರತೆಯ ವಿಚಾರದಲ್ಲಿ ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿದೆ.**<br><br>**ಮಾತೃಪೂರ್ಣ ಯೋಜನೆ:** ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ಗರ್ಭಿಣಿ ಮತ್ತು ಬಾಣಂತಿಯರಿಗೆ ಅಂಗನವಾಡಿ ಕೇಂದ್ರಗಳಲ್ಲಿ ಮಧ್ಯಾಹ್ನದ ಪೌಷ್ಟಿಕ ಬಿಸಿ ಊಟವನ್ನು ನೀಡುವ **"ಮಾತೃಪೂರ್ಣ"** ಯೋಜನೆಯನ್ನು ಅಕ್ಟೋಬರ್ 02, 2017ರಿಂದ ರಾಜ್ಯಾದ್ಯಂತ ಜಾರಿಗೊಳಿಸಲಾಗಿದೆ.<br><br>ಈ ಕಾರ್ಯಕ್ರಮದಡಿ ನೀಡಲಾಗುವ ಮಧ್ಯಾಹ್ನದ ಪೌಷ್ಟಿಕ ಊಟವು ಅನ್ನ, ಸಾಂಬಾರ್, ಪಲ್ಯದ ಜೊತೆಗೆ ಬೇಯಿಸಿದ ಮೊಟ್ಟೆ ಮತ್ತು 200 ಮಿ.ಲೀ. ಹಾಲು ಹಾಗೂ ಬೆಲ್ಲ ಹಾಗೂ ಕಡಲೆ ಬೀಜದಿಂದ ಮಾಡಿದ ಚಿಕ್ಕಿಯನ್ನು ಒಳಗೊಂಡಿದ್ದು ತಿಂಗಳಿಗೆ 25 ದಿನಗಳು ನೀಡಲಾಗುವುದು. ಮೊಟ್ಟೆ ತಿನ್ನದ ಗರ್ಭಿಣಿ/ ಬಾಣಂತಿಯರಿಗೆ ಮೊಳಕೆಭರಿಸಿದ ಕಾಳನ್ನು ನೀಡಲಾಗುವುದು.<br><br>ಈ ಕಾರ್ಯಕ್ರಮದ ಮುಖ್ಯ ಉದ್ದೇಶವೆಂದರೆ ಜನಿಸುವ ಮಕ್ಕಳಲ್ಲಿನ ಅಪೌಷ್ಟಿಕತೆಯನ್ನು ತಡೆಗಟ್ಟುವುದು, ಹೆರಿಗೆ ಸಮಯದಲ್ಲಿನ ಗರ್ಭಿಣಿಯರ ಹಾಗೂ ಶಿಶುಗಳ ಮರಣ ಪ್ರಮಾಣವನ್ನು ಕಡಿಮೆಗೊಳಿಸುವುದು, ಗರ್ಭಿಣಿ ಹಾಗೂ ಬಾಣಂತಿಯರಲ್ಲಿ ರಕ್ತಹೀನತೆ ತಡೆಗಟ್ಟುವುದಾಗಿದೆ.<br><br>**ಮುಖ್ಯಮಂತ್ರಿಗಳ ಮಾತೃಶ್ರೀ ಯೋಜನೆ:**<br>ಈ ಯೋಜನೆಯಡಿ ಬಿ.ಪಿ.ಎಲ್ ಮತ್ತು ಆದ್ಯತಾ ಕುಟುಂಬದ (Priority household) ಗರ್ಭಿಣಿಯರಿಗೆ ಮೊದಲ ಎರಡು ಜೀವಂತ ಹೆರಿಗೆಯ ಪೂರ್ವದ ಕೊನೆಯ ಮೂರು ತಿಂಗಳು ಮಾಸಿಕ ರೂ.1,000/- ಗಳಂತೆ ಹಾಗೂ ಬಾಣಂತಿಯರಿಗೆ ಹೆರಿಗೆ ನಂತರದ ಮೂರು ತಿಂಗಳ ಕಾಲ ಮಾಸಿಕ ರೂ.1,000/- ಗಳಂತೆ ಒಟ್ಟು ರೂ.6,000/- ಫಲಾನುಭವಿಗಳ ಆಧಾರ್ ಲಿಂಕ್ಡ್ ಬ್ಯಾಂಕ್ ಖಾತೆಗೆ ನೇರವಾಗಿ ವರ್ಗಾಯಿಸಲಾಗುತ್ತಿದೆ.<br><br>**ಪ್ರಧಾನ ಮಂತ್ರಿ ಮಾತೃವಂದನಾ ಯೋಜನೆ:**<br>ಪ್ರಧಾನ ಮಂತ್ರಿಗಳು ಪ್ಯಾನ್ ಇಂಡಿಯಾ ಅಡಿಯಲ್ಲಿ **"ಪ್ರಧಾನ ಮಂತ್ರಿ ಮಾತೃವಂದನಾ ಯೋಜನೆ"** (Maternity Benefit Programme) ಎಂಬ ಹೊಸ ಯೋಜನೆಯನ್ನು ಕೇಂದ್ರ ಸರ್ಕಾರವು 2017-18ನೇ ಸಾಲಿನಲ್ಲಿ ಜಾರಿಗೆ ತಂದಿರುತ್ತದೆ. |

| | | |
|---|---|---|
| | | ಈ ಯೋಜನೆಯಡಿ ಗರ್ಭಿಣಿ / ಬಾಣಂತಿ ಮಹಿಳೆಯರಿಗೆ ರೂ.5000/- ಗಳನ್ನು ಮೂರು ಕಂತುಗಳಲ್ಲಿ ಸಹಾಯಧನವನ್ನು ನೇರ ನಗದು ವರ್ಗಾವಣೆ ಮೂಲಕ ಫಲಾನುಭವಿಯ ಖಾತೆಗೆ ವರ್ಗಾಯಿಸುವುದಾಗಿರುತ್ತದೆ. ಸದರಿ ಯೋಜನೆ ಸೌಲಭ್ಯವನ್ನು ಮೊದಲ ಜೀವಂತ ಹೆರಿಗೆಗೆ ಮಾತ್ರ ಸೀಮಿತಗೊಳಿಸಲಾಗಿದೆ.<br><br>**ಇದಲ್ಲದೆ ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾಗುವ ಮಕ್ಕಳಿಗೆ ಪೂರಕ ಪೌಷ್ಟಿಕ ಆಹಾರ ಕಾರ್ಯಕ್ರಮದಡಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.**<br><br>6 ತಿಂಗಳಿನಿಂದ 6 ವರ್ಷದ ಮಕ್ಕಳಿಗೆ ಅಂಗನವಾಡಿ ಕೇಂದ್ರಗಳ ಮೂಲಕ ನೀಡುತ್ತಿರುವ ಪೂರಕ ಪೌಷ್ಟಿಕ ಆಹಾರದ ಜೊತೆಗೆ ಕ್ಷೀರಭಾಗ್ಯ ಯೋಜನೆಯಡಿ ವಾರದಲ್ಲಿ 5 ದಿನ ಕೆನೆಭರಿತ 150 ಎಂ.ಎಲ್. ಹಾಲನ್ನು ನೀಡಲಾಗುತ್ತಿದೆ. ತೀವ್ರ ಅಪೌಷ್ಟಿಕ ಮಕ್ಕಳಿಗೆ ವಾರದಲ್ಲಿ 3 ದಿನ 200 ಎಂ.ಎಲ್. ಕೆನೆಭರಿತ ಹಾಲನ್ನು ಹಾಗೂ 3 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br><br>• ಹಿಂದುಳಿದ 5 ಜಿಲ್ಲೆಗಳಾದ ಬೀದರ್, ಕಲ್ಬುರ್ಗಿ, ರಾಯಚೂರು, ಕೊಪ್ಪಳ ಹಾಗೂ ಯಾದಗಿರಿ ಜಿಲ್ಲೆಗಳ ಸಾಧಾರಣ ಅಪೌಷ್ಟಿಕತೆ ಇರುವ ಮಕ್ಕಳಿಗೆ ಪೂರಕ ಪೌಷ್ಟಿಕ ಆಹಾರದ ಜೊತೆಯಲ್ಲಿ ವಾರದಲ್ಲಿ 3 ದಿನ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್. ಹಾಲು ನೀಡಲಾಗುತ್ತಿದೆ. ಹಾಗೂ ಈ ಜಿಲ್ಲೆಗಳಲ್ಲಿ ಮೊಟ್ಟೆ ತಿನ್ನದ ಸಾಧಾರಣ ಅಪೌಷ್ಟಿಕ ಮಕ್ಕಳಿಗೆ ವಾರದಲ್ಲಿ 6 ದಿನ 200 ಎಂ.ಎಲ್. ಹಾಲು ನೀಡಲಾಗುತ್ತಿದೆ. |
| ಆ. | ಪ್ರಸ್ತುತ ರಾಜ್ಯದಲ್ಲಿ ಎಷ್ಟು ಹೊಸ ಅಂಗನವಾಡಿ ಬೇಡಿಕೆ ಇದೆ; ಪ್ರಸ್ತುತ ಅಂಗನವಾಡಿ ಕೇಂದ್ರಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿದೆಯೇ: (ಮಾಹಿತಿ ನೀಡುವುದು) | ಪ್ರಸ್ತುತ ರಾಜ್ಯದಲ್ಲಿ ಹೊಸ ಅಂಗನವಾಡಿ ಕೇಂದ್ರಗಳನ್ನು ಪ್ರಾರಂಭಿಸಲು ಯಾವುದೇ ಬೇಡಿಕೆಗಳು ಜಿಲ್ಲೆಗಳಿಂದ ಬಂದಿರುವುದಿಲ್ಲ. ಈಗಿರುವ ಅಂಗನವಾಡಿ ಕೇಂದ್ರಗಳು ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿವೆ. |
| ಇ. | ರಾಜ್ಯದ ಬರಪೀಡಿತ ಗ್ರಾಮೀಣ ಪ್ರದೇಶದ ಮಕ್ಕಳ ಅಪೌಷ್ಟಿಕತೆ ಹೋಗಲಾಡಿಲು ಸರ್ಕಾರದ ಮುಂದೆ ಯಾವ ಯೋಜನೆಯಿದೆ: (ವಿವರ ನೀಡುವುದು) | **ರಾಜ್ಯದಲ್ಲಿನ ಮಕ್ಕಳ ಅಪೌಷ್ಟಿಕತೆಯನ್ನು ಹೋಗಲಾಡಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳು ಈ ಕೆಳಗಿನಂತಿದೆ.**<br><br>• 0-6 ವರ್ಷದ ಮಕ್ಕಳಿಗೆ ಪ್ರತಿ ದಿನ ಪ್ರತಿ ಮಗುವಿಗೆ ರೂ. 8.00 ಮೌಲ್ಯದ 500 ಕ್ಯಾಲೋರಿ ಮತ್ತು 12-15 ಗ್ರಾಂ ಪ್ರೋಟೀನ್ ಒಳಗೊಂಡ ಪೂರಕ ಪೌಷ್ಟಿಕ ಆಹಾರ.<br>• ತೀವ್ರ ಅಪೌಷ್ಟಿಕ ಮಕ್ಕಳಿಗೆ ಪ್ರತಿ ದಿನ ರೂ.12.00 ಮೌಲ್ಯದ ಪೂರಕ ಪೌಷ್ಟಿಕ ಆಹಾರವನ್ನು ನೀಡಲಾಗುತ್ತಿದೆ.<br>• ತೀವ್ರ ಅಪೌಷ್ಟಿಕ ಮಕ್ಕಳಿಗೆ ಹಾಗೂ ಹಿಂದುಳಿದ 5 ಜಿಲ್ಲೆಗಳಾದ ಬೀದರ್, ಕಲಬುರಗಿ, ಯಾದಗಿರಿ, ಕೊಪ್ಪಳ ಹಾಗೂ ರಾಯಚೂರಿನ ಸಾಧಾರಣ ಅಪೌಷ್ಟಿಕ ಮಕ್ಕಳಿಗೆ ವಾರದಲ್ಲಿ ಹೆಚ್ಚುವರಿಯಾಗಿ 3 ದಿನ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್ ಕೆನೆಭರಿತ ಹಾಲನ್ನು, ಮೊಟ್ಟೆ ಸ್ವೀಕರಿಸದಿರುವ ಮಕ್ಕಳಿಗೆ ವಾರದಲ್ಲಿ 6 ದಿನ ಕೆನೆಭರಿತ ಹಾಲನ್ನು ನೀಡಲಾಗುತ್ತಿದೆ.<br>• ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾದ 3 ರಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br>• ತೀವ್ರ ಅಪೌಷ್ಟಿಕ ಮಕ್ಕಳಿಗೆ ವೈದ್ಯಕೀಯ ವೆಚ್ಚ ಯೋಜನೆಯಡಿ |

<table>
<tr><td></td><td></td><td>ಔಷಧಿ ಹಾಗೂ ಚಿಕಿತ್ಸಾ ಆಹಾರಕ್ಕಾಗಿ (Therapeutic food) ವರ್ಷಕ್ಕೆ ಪ್ರತಿ ಮಗುವಿಗೆ ರೂ.2000/-ಗಳಂತೆ ವೆಚ್ಚ ಭರಿಸಲಾಗುತ್ತಿದೆ.<br>• ರಾಜ್ಯ ಸರ್ಕಾರದ ಕ್ಷೀರ ಭಾಗ್ಯ ಯೋಜನೆಯಡಿ 6 ತಿಂ 6 ವರ್ಷದ ಎಲ್ಲಾ ಅಂಗನವಾಡಿ ಮಕ್ಕಳಿಗೆ ವಾರದಲ್ಲಿ 5 ದಿನ 150 ಮಿ.ಲಿ ಹಾಲು ನೀಡಲಾಗುತ್ತಿದೆ. (15ಗ್ರಾಂ ಕೆನೆಭರಿತ ಹಾಲಿನಪುಡಿ, 10 ಗ್ರಾಂ ಸಕ್ಕರೆ)<br>• ಆರೋಗ್ಯ ಇಲಾಖೆಯ NRC ಹಾಗೂ MNRC ಗಳಲ್ಲಿ ಅಪೌಷ್ಟಿಕ ಮಕ್ಕಳಿಗೆ ಚಿಕಿತ್ಸೆ ನೀಡಲಾಗುತ್ತಿದೆ.<br>• ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾಗಿರುವ ಫಲಾನುಭವಿಗಳ ಆರೋಗ್ಯ ತಪಾಸಣೆಯನ್ನು ಪ್ರತಿ 2 ತಿಂಗಳಿಗೊಮ್ಮೆ ಆರೋಗ್ಯ ಇಲಾಖೆಯ ಸಹಯೋಗದೊಂದಿಗೆ ತಜ್ಞ ವೈದ್ಯರಿಂದ ಕೈಗೊಳ್ಳಲಾಗುತ್ತಿದೆ.<br>• ಮಕ್ಕಳ ತಾಯಂದಿರಿಗೆ ನಿಯಮಿತವಾಗಿ ಆರೋಗ್ಯ ಮತ್ತು ಪೌಷ್ಟಿಕತೆಯ ಬಗ್ಗೆ ತಿಳುವಳಿಕೆ ಹಾಗೂ ಪ್ರಾತ್ಯಕ್ಷತೆ ನೀಡಿ ಅಪೌಷ್ಟಿಕತೆಯನ್ನು ಕಡಿಮೆ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.</td></tr>
<tr><td>ಈ</td><td>ಕಳೆದ 2 ವರ್ಷಗಳಲ್ಲಿ ರಾಜ್ಯದ ವಿಕಲಾಂಗರಿಗೆ ಎಷ್ಟು ತ್ರಿಚಕ್ರ ವಾಹನಗಳನ್ನು ಹಾಗೂ ಇತರೆ ಪರಿಕರಗಳನ್ನು ವಿತರಿಸಲಾಗಿದೆ; (ವಿವರ ನೀಡುವುದು)</td><td>ಕಳೆದ 2 ವರ್ಷಗಳಲ್ಲಿ ರಾಜ್ಯದ ವಿಕಲಾಂಗರಿಗೆ ಎಷ್ಟು ತ್ರಿಚಕ್ರ ವಾಹನಗಳನ್ನು ಹಾಗೂ ಇತರೆ ಪರಿಕರಗಳ ವಿತರಿಸಲಾಗಿದೆ ಎಂಬ ಮಾಹಿತಿಯನ್ನು ಅನುಬಂಧ-01ರಲ್ಲಿ ಲಗತ್ತಿಸಿದೆ.</td></tr>
<tr><td>ಉ</td><td>ಹಿರಿಯ ನಾಗರೀಕರ ಸಬಲೀಕರಣಕ್ಕೆ ಇದುವರೆವಿಗೂ ಸರ್ಕಾರ ಖರ್ಚು ಮಾಡಿದ ಹಣವೆಷ್ಟು; ಯಾವ ಯೋಜನೆಗಳು ಫಲಾನುಭವಿಗಳಿಗೆ ತಲುಪಿದೆ; ಯಾವ ಯೋಜನೆಗಳು ಇನ್ನು ಕಾರ್ಯಗತ ಗೊಂಡಿಲ್ಲ? (ವಿವರ ನೀಡುವುದು)</td><td>ಹಿರಿಯ ನಾಗರಿಕರ ಸಬಲೀಕರಣಕ್ಕಾಗಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಈ ಕೆಳಕಂಡ ಯೋಜನೆಗಳಿಗೆ ಅನುದಾನವನ್ನು ನೀಡಲಾಗುತ್ತಿದೆ.<br>
<table>
<tr><th>ಕ್ರ. ಸ</th><th>ಯೋಜನೆಯ ಹೆಸರು</th><th>ಸ್ವಯಂ ಸೇವಾ ಸಂಸ್ಥೆಗಳ ಸಂಖ್ಯೆ</th><th>ಒಂದು ಸಂಸ್ಥೆ ಬಿಡುಗಡೆಯಾಗುವ ಅನುದಾನದ ವಿವರ</th></tr>
<tr><td>1</td><td>ವೃದ್ಧಾಶ್ರಮಗಳು</td><td>29</td><td>8.00 ಲಕ್ಷಗಳು</td></tr>
<tr><td>2</td><td>ಹಿರಿಯ ನಾಗರಿಕರ ಹಗಲು ಯೋಗ ಕ್ಷೇಮ ಕೇಂದ್ರ</td><td>25</td><td>9.84 ಲಕ್ಷಗಳು</td></tr>
<tr><td>3</td><td>ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರ</td><td>28</td><td>6.15 ಲಕ್ಷಗಳು</td></tr>
</table></td></tr>
</table>

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ : ಮಮಇ 93 ಐಸಿಡಿ 2020

ಅನುಬಂಧ-1

| ಕ್ರ. ಸಂ | ಜಿಲ್ಲೆಗಳ ಹೆಸರು | 2017-18 | 2018-19 | 2017-18 | 2018-19 | 2017-18 | 2018-19 |
|---|---|---|---|---|---|---|---|
| | | ತ್ರಿಚಕ್ರ ವಾಹನ | | ಯಂತ್ರ ಚಾಲಿತ ದ್ವಿಚಕ್ರ ವಾಹನ | | ವ್ಹೀಲ್ ಚೇರ್ | |
| 1 | ಬೆಂಗಳೂರು ನಗರ | 0 | 0 | 100 | 0 | 25 | 27 |
| 2 | ಬೆಂಗಳೂರು (ಗ್ರಾ) | 15 | 0 | 15 | 0 | 20 | 0 |
| 3 | ಬೆಳಗಾವಿ | 0 | 12 | 395 | 0 | 0 | 94 |
| 4 | ಬಳ್ಳಾರಿ | 7 | 3 | 135 | 0 | 10 | 12 |
| 5 | ಬೀದರ್ | 0 | 0 | 98 | 0 | 21 | 21 |
| 6 | ವಿಜಯಪುರ | 0 | 0 | 113 | 0 | 17 | 67 |
| 7 | ಬಾಗಲಕೋಟೆ | 17 | 12 | 271 | 0 | 22 | 30 |
| 8 | ಚಿತ್ರದುರ್ಗ | 31 | 13 | 120 | 0 | 40 | 9 |
| 9 | ಚಿಕ್ಕಮಗಳೂರು | 0 | 5 | 75 | 0 | 6 | 12 |
| 10 | ಚಾಮರಾಜನಗರ | 10 | 15 | 164 | 0 | 60 | 117 |
| 11 | ಧಾರವಾಡ | 8 | 10 | 135 | 0 | 182 | 233 |
| 12 | ದಕ್ಷಿಣ ಕನ್ನಡ | 0 | 0 | 91 | 64 | 5 | 4 |
| 13 | ದಾವಣಗೆರೆ | 10 | 0 | 257 | 0 | 30 | 32 |
| 14 | ಕಲಬುರಗಿ | 15 | 0 | 175 | 0 | 14 | 50 |
| 15 | ಗದಗ | 5 | 1 | 138 | 0 | 12 | 6 |
| 16 | ಹಾಸನ | 18 | 11 | 110 | 0 | 31 | 61 |
| 17 | ಹಾವೇರಿ | 0 | 13 | 90 | 0 | 6 | 19 |
| 18 | ಕೊಡಗು | 4 | 1 | 44 | 0 | 15 | 10 |
| 19 | ಕೋಲಾರ | 0 | 0 | 141 | 0 | 0 | 0 |
| 20 | ಕೊಪ್ಪಳ | 20 | 13 | 125 | 0 | 20 | 10 |
| 21 | ಮೈಸೂರು | 26 | 15 | 273 | 24 | 0 | 26 |
| 22 | ಮಂಡ್ಯ | 10 | 14 | 130 | 0 | 10 | 11 |
| 23 | ರಾಯಚೂರು | 8 | 15 | 165 | 0 | 5 | 60 |
| 24 | ಶಿವಮೊಗ್ಗ | 0 | 0 | 135 | 0 | 11 | 10 |
| 25 | ತುಮಕೂರು | 0 | 5 | 128 | 0 | 10 | 10 |
| 26 | ಉತ್ತರ ಕನ್ನಡ | 0 | 0 | 90 | 0 | 2 | 0 |
| 27 | ಉಡುಪಿ | 0 | 0 | 62 | 0 | 3 | 7 |
| 28 | ರಾಮನಗರ | 1 | 2 | 89 | 0 | 10 | 14 |
| 29 | ಚಿಕ್ಕಬಳ್ಳಾಪುರ | 6 | 12 | 40 | 109 | 6 | 24 |
| 30 | ಯಾದಗಿರಿ | 12 | 17 | 110 | 0 | 21 | 28 |

| ಕ್ರ. ಸಂ | ಜಿಲ್ಲೆಗಳ ಹೆಸರು | 2017-18 | 2018-19 | 2017-18 | 2018-19 | 2017-18 | 2018-19 |
|---|---|---|---|---|---|---|---|
| | | ಬಿಳಿಕೋಲು | | ವಾಕರ್ | | ಎಲ್ಬೋಕ್ರಚರ್ | |
| 1 | ಬೆಂಗಳೂರು ನಗರ | 55 | 0 | 15 | 13 | 10 | 0 |
| 2 | ಬೆಂಗಳೂರು (ಗ್ರಾ) | 5 | 0 | 0 | 0 | 0 | 0 |
| 3 | ಬೆಳಗಾವಿ | 0 | 3 | 0 | 4 | 0 | 0 |
| 4 | ಬಳ್ಳಾರಿ | 0 | 0 | 2 | 5 | 2 | 2 |
| 5 | ಬೀದರ್ | 22 | 22 | 0 | 0 | 0 | 0 |
| 6 | ವಿಜಯಪುರ | 0 | 0 | 15 | 20 | 15 | 100 |
| 7 | ಬಾಗಲಕೋಟೆ | 12 | 76 | 70 | 250 | 75 | 120 |
| 8 | ಚಿತ್ರದುರ್ಗ | 21 | 6 | 20 | 0 | 0 | 0 |
| 9 | ಚಿಕ್ಕಮಗಳೂರು | 10 | 20 | 20 | 11 | 16 | 19 |
| 10 | ಚಾಮರಾಜನಗರ | 37 | 0 | 5 | 0 | 0 | 0 |
| 11 | ಧಾರವಾಡ | 0 | 0 | 8 | 6 | 10 | 12 |
| 12 | ದಕ್ಷಿಣ ಕನ್ನಡ | 0 | 0 | 0 | 0 | 2 | 1 |
| 13 | ದಾವಣಗೆರೆ | 12 | 0 | 0 | 18 | 0 | 0 |
| 14 | ಕಲಬುರರ್ಗಿ | 50 | 125 | 0 | 0 | 75 | 100 |
| 15 | ಗದಗ | 3 | 0 | 0 | 2 | 4 | 2 |
| 16 | ಹಾಸನ | 35 | 35 | 8 | 5 | 30 | 30 |
| 17 | ಹಾವೇರಿ | 0 | 25 | 6 | 37 | 0 | 24 |
| 18 | ಕೊಡಗು | 4 | 2 | 4 | 0 | 0 | 1 |
| 19 | ಕೋಲಾರ | 0 | 0 | 0 | 0 | 0 | 0 |
| 20 | ಕೊಪ್ಪಳ | 4 | 6 | 7 | 3 | 0 | 0 |
| 21 | ಮೈಸೂರು | 0 | 14 | 0 | 0 | 0 | 0 |
| 22 | ಮಂಡ್ಯ | 0 | 0 | 0 | 13 | 20 | 0 |
| 23 | ರಾಯಚೂರು | 27 | 20 | 0 | 0 | 5 | 20 |
| 24 | ಶಿವಮೊಗ್ಗ | 0 | 0 | 0 | 0 | 0 | 0 |
| 25 | ತುಮಕೂರು | 22 | 24 | 0 | 0 | 13 | 13 |
| 26 | ಉತ್ತರ ಕನ್ನಡ | 0 | 0 | 6 | 0 | 0 | 0 |
| 27 | ಉಡುಪಿ | 0 | 0 | 1 | 7 | 0 | 0 |
| 28 | ರಾಮನಗರ | 4 | 2 | 7 | 3 | 1 | 2 |
| 29 | ಚಿಕ್ಕಬಳ್ಳಾಪುರ | 0 | 12 | 13 | 23 | 3 | 14 |
| 30 | ಯಾದಗಿರಿ | 24 | 32 | 31 | 48 | 8 | 14 |

ಅನುಬಂಧ-1

| ಕ್ರ ಸಂ | ಜಿಲ್ಲೆಗಳ ಹೆಸರು | 2017-18 | 2018-19 | 2017-18 | 2018-19 | 2017-18 | 2018-19 | 2017-18 | 2018-19 |
|---|---|---|---|---|---|---|---|---|---|
| | | ಶ್ರವಣ ಸಾಧನ | | ಕಮೋಡ್ ಚೇರ್ | | ಬಗಲು ಬಡಿಗೆ | | ಬ್ರೈಲ್ ವಾಚ್ | |
| 1 | ಬೆಂಗಳೂರು ನಗರ | 21 | 24 | 5 | 0 | 32 | 12 | 25 | 56 |
| 2 | ಬೆಂಗಳೂರು (ಗ್ರಾ) | 0 | 0 | 0 | 0 | 0 | 0 | 0 | 0 |
| 3 | ಬೆಳಗಾವಿ | 52 | 0 | 0 | 0 | 0 | 12 | 0 | 3 |
| 4 | ಬಳ್ಳಾರಿ | 11 | 40 | 0 | 0 | 30 | 43 | 3 | 0 |
| 5 | ಬೀದರ್ | 22 | 22 | 0 | 0 | 18 | 28 | 10 | 10 |
| 6 | ವಿಜಯಪುರ | 17 | 78 | 14 | 25 | 20 | 50 | 0 | 0 |
| 7 | ಬಾಗಲಕೋಟೆ | 16 | 90 | 6 | 12 | 47 | 0 | 22 | 0 |
| 8 | ಚಿತ್ರದುರ್ಗ | 117 | 60 | 0 | 0 | 23 | 4 | 13 | 8 |
| 9 | ಚಿಕ್ಕಮಗಳೂರು | 12 | 42 | 0 | 0 | 24 | 0 | 0 | 5 |
| 10 | ಚಾಮರಾಜನಗರ | 46 | 0 | 0 | 0 | 0 | 0 | 0 | 0 |
| 11 | ಧಾರವಾಡ | 25 | 30 | 0 | 0 | 35 | 40 | 0 | 0 |
| 12 | ದಕ್ಷಿಣ ಕನ್ನಡ | 51 | 13 | 0 | 0 | 0 | 0 | 2 | 0 |
| 13 | ದಾವಣಗೆರೆ | 17 | 274 | 0 | 0 | 13 | 25 | 0 | 25 |
| 14 | ಕಲಬುರಗಿ | 30 | 75 | 0 | 100 | 50 | 150 | 25 | 50 |
| 15 | ಗದಗ | 13 | 14 | 0 | 0 | 8 | 0 | 4 | 3 |
| 16 | ಹಾಸನ | 12 | 10 | 2 | 1 | 0 | 0 | 8 | 0 |
| 17 | ಹಾವೇರಿ | 94 | 421 | 0 | 0 | 0 | 30 | 0 | 2 |
| 18 | ಕೊಡಗು | 28 | 48 | 0 | 0 | 0 | 0 | 0 | 0 |
| 19 | ಕೋಲಾರ | 0 | 0 | 0 | 0 | 0 | 0 | 0 | 0 |
| 20 | ಕೊಪ್ಪಳ | 45 | 37 | 0 | 0 | 23 | 8 | 9 | 2 |
| 21 | ಮೈಸೂರು | 21 | 2 | 0 | 0 | 0 | 15 | 0 | 0 |
| 22 | ಮಂಡ್ಯ | 12 | 27 | 0 | 0 | 30 | 14 | 0 | 6 |
| 23 | ರಾಯಚೂರು | 16 | 30 | 0 | 0 | 0 | 5 | 0 | 30 |
| 24 | ಶಿವಮೊಗ್ಗ | 23 | 337 | 0 | 0 | 0 | 0 | 0 | 0 |
| 25 | ತುಮಕೂರು | 12 | 23 | 0 | 0 | 0 | 0 | 0 | 15 |
| 26 | ಉತ್ತರ ಕನ್ನಡ | 30 | 0 | 0 | 0 | 0 | 0 | 0 | 0 |
| 27 | ಉಡುಪಿ | 0 | 0 | 1 | 0 | 0 | 0 | 0 | 0 |
| 28 | ರಾಮನಗರ | 3 | 2 | 0 | 2 | 0 | 0 | 1 | 1 |
| 29 | ಚಿಕ್ಕಬಳ್ಳಾಪುರ | 7 | 12 | 0 | 10 | 3 | 12 | 8 | 12 |
| 30 | ಯಾದಗಿರಿ | 26 | 33 | 3 | 8 | 27 | 38 | 12 | 19 |

## ಅನುಬಂಧ-1

| ಕ್ರ. ಸಂ | ಜಿಲ್ಲೆಗಳ ಹೆಸರು | 2017-18 | 2018-19 | 2017-18 | 2018-19 | 2017-18 | 2018-19 | 2017-18 | 2018- |
|---|---|---|---|---|---|---|---|---|---|
| | | ಎಂ.ಆರ್ ಕಿಟ್ | | ಟಾಕಿಂಗ್ ಲ್ಯಾಪ್ ಟಾಪ್ | | ವಾಟರ್ ಬೆಡ್ | | ಇತರೆ | |
| 1 | ಬೆಂಗಳೂರು ನಗರ | 0 | 20 | 105 | 0 | 0 | 20 | 100 | 0 |
| 2 | ಬೆಂಗಳೂರು (ಗ್ರಾ) | 0 | 0 | 6 | 0 | 0 | 0 | 0 | 0 |
| 3 | ಬೆಳಗಾವಿ | 0 | 0 | 45 | 0 | 0 | 0 | 0 | 0 |
| 4 | ಬಳ್ಳಾರಿ | 0 | 0 | 10 | 0 | 0 | 0 | 23 | 15 |
| 5 | ಬೀದರ್ | 0 | 0 | 0 | 0 | 0 | 0 | 20 | 10 |
| 6 | ವಿಜಯಪುರ | 0 | 0 | 0 | 10 | 0 | 0 | 0 | 0 |
| 7 | ಬಾಗಲಕೋಟೆ | 0 | 0 | 0 | 0 | 0 | 0 | 63 | 72 |
| 8 | ಚಿತ್ರದುರ್ಗ | 0 | 0 | 18 | 0 | 0 | 0 | 0 | 0 |
| 9 | ಚಿಕ್ಕಮಗಳೂರು | 0 | 5 | 16 | 0 | 0 | 0 | 0 | 0 |
| 10 | ಚಾಮರಾಜನಗರ | 0 | 0 | 0 | 0 | 0 | 0 | 0 | 0 |
| 11 | ಧಾರವಾಡ | 0 | 25 | 74 | 0 | 16 | 6 | 0 | 0 |
| 12 | ದಕ್ಷಿಣ ಕನ್ನಡ | 0 | 0 | 8 | 0 | 3 | 0 | 0 | 0 |
| 13 | ದಾವಣಗೆರೆ | 0 | 0 | 29 | 0 | 0 | 0 | 0 | 0 |
| 14 | ಕಲಬುರಗಿ | 0 | 33 | 40 | 0 | 8 | 30 | 0 | 0 |
| 15 | ಗದಗ | 6 | 4 | 13 | 0 | 0 | 6 | 0 | 3 |
| 16 | ಹಾಸನ | 0 | 0 | 12 | 0 | 2 | 0 | 0 | 0 |
| 17 | ಹಾವೇರಿ | 0 | 0 | 0 | 0 | 0 | 27 | 0 | 0 |
| 18 | ಕೊಡಗು | 0 | 0 | 7 | 5 | 0 | 0 | 0 | 0 |
| 19 | ಕೋಲಾರ | 0 | 0 | 10 | 0 | 0 | 0 | 0 | 0 |
| 20 | ಕೊಪ್ಪಳ | 0 | 2 | 10 | 4 | 15 | 2 | 0 | 0 |
| 21 | ಮೈಸೂರು | 22 | 0 | 0 | 0 | 0 | 0 | 265 | 167 |
| 22 | ಮಂಡ್ಯ | 0 | 0 | 22 | 0 | 0 | 5 | 0 | 45 |
| 23 | ರಾಯಚೂರು | 10 | 10 | 24 | 0 | 0 | 0 | 0 | 0 |
| 24 | ಶಿವಮೊಗ್ಗ | 0 | 0 | 16 | 0 | 0 | 0 | 0 | 0 |
| 25 | ತುಮಕೂರು | 0 | 3 | 20 | 19 | 0 | 0 | 0 | 0 |
| 26 | ಉತ್ತರ ಕನ್ನಡ | 0 | 0 | 26 | 0 | 0 | 0 | 0 | 0 |
| 27 | ಉಡುಪಿ | 0 | 0 | 0 | 0 | 0 | 0 | 0 | 0 |
| 28 | ರಾಮನಗರ | 0 | 0 | 21 | 0 | 3 | 1 | 14 | 29 |
| 29 | ಚಿಕ್ಕಬಳ್ಳಾಪುರ | 4 | 6 | 15 | 11 | 0 | 0 | 0 | 6 |
| 30 | ಯಾದಗಿರಿ | 0 | 4 | 5 | 3 | 0 | 0 | 0 | 0 |